ಸದನದಲ್ಲಿ ಉತ್ತರಿಸುವ ಪ್ರಶ್ನೆ



**ಕರ್ನಾಟಕ ವಿಧಾನ ಪರಿಷತ್ತು**
ನೂರ ನಲವತ್ತೆರಡನೆಯ ಅಧಿವೇಶನ
ಸೋಮವಾರ, ದಿನಾಂಕ: 14ನೇ ಡಿಸೆಂಬರ್, 2020

ರಾಜ್ಯದ ಸಂರಕ್ಷಿತ ಅರಣ್ಯ ಮತ್ತು ಅಭಯಾರಣ್ಯಗಳ ಕುರಿತು

ಶ್ರೀ ಹೆಚ್.ಎಂ. ರಮೇಶ ಗೌಡ (ವಿಧಾನಸಭೆಯಿಂದ ಚುನಾಯಿತರಾದವರು) -

88(641) ಅರಣ್ಯ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಕೋವಿಡ್ ಸಮಯದಲ್ಲಿ ರಾಜ್ಯದ ಸಂರಕ್ಷಿತ ಅರಣ್ಯ ಮತ್ತು ಅಭಯಾರಣ್ಯಗಳ ವನ್ಯಜೀವಿಗಳ ಸಂಖ್ಯೆ ಏರಿಕೆಯಾಗಿದೆಯೇ; (ಸಂಪೂರ್ಣ ಮಾಹಿತಿ ನೀಡುವುದು)

(ಆ) ತುಮಕೂರು ಜಿಲ್ಲೆಯ ಮಧುಗಿರಿ ಸಮೀಪದ ಹಾಗೂ ಹಾವೇರಿಯ ಕೃಷ್ಣಮೃಗ ಸಂರಕ್ಷಿತ ಅರಣ್ಯ ನಿರ್ವಹಣೆ ಕಳಪೆಯಾಗಿದೆ ಎನ್ನುವ ದೂರುಗಳು ಸರ್ಕಾರದ ಗಮನಕ್ಕೆ ಬಂದಿವೆಯೇ; ಬಂದಿದ್ದಲ್ಲಿ, ಸರ್ಕಾರ ಕೈಗೊಂಡ ಕ್ರಮಗಳೇನು;

(ಇ) ಕಪ್ಪತಗುಡ್ಡದ ಸ್ವಾಭಾವಿಕ ರಕ್ಷಿತ ಅರಣ್ಯ ಗಣಿಗಾರಿಕೆಯ ಭೀತಿಯಲ್ಲಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಕಪ್ಪತಗುಡ್ಡ ಸಂರಕ್ಷಣೆಗೆ ಯಾವ ಕ್ರಮ ಕೈಗೊಳ್ಳಲಾಗಿದೆ;

(ಈ) ಅಳಿವಿನಂಚಿನಲ್ಲಿರುವ ಸಿಂಹ ಬಾಲದ ಕೋತಿ ಮತ್ತು ಹಾರ್ನ್‌ಬಿಲ್ ಪಕ್ಷಿ ಸಹಜ ನೆಲೆಯ ರಕ್ಷಣೆಗೆ ಸರ್ಕಾರ ಯಾವ ಕ್ರಮ ಕೈಗೊಂಡಿದೆ; (ಸಂಪೂರ್ಣ ಮಾಹಿತಿ ನೀಡುವುದು)

(ಉ) ಅರಣ್ಯ ಇಲಾಖೆಯಲ್ಲಿ ಬಾಕಿ ಉಳಿದ ನೇಮಕಾತಿ ಪ್ರಕ್ರಿಯೆ ಪೂರ್ಣಗೊಳಿಸಲು ಕ್ರಮ ಕೈಗೊಳ್ಳಲಾಗಿದೆಯೇ? (ಮಾಹಿತಿ ನೀಡುವುದು)